


# ಕಾಲನೌಕೆ

ರಾಜಶೇಖರ ಭೂಸನೂರಮಠ

### ಮಕ್ಕಳಿಗೆ ನಾಳೆಯ ಕಥೆಗಳು

# ಕಾಲ ನೌಕೆ

ರಾಜಶೇಖರ ಭೂಸನೂರಮಠ



ನವಕರ್ನಾಟಕ ಪ್ರಕಾಶನ

KAALA NAUKE
*Science-fiction for Children in Kannada*
by Prof. Rajashekara Bhoosnurmath

**Second Edition : December, 1992** **Pages : 32** **Rs. 6.**

ಮೊದಲನೇ ಮುದ್ರಣ : ಜೂನ್ 1991
ಎರಡನೇ ಮುದ್ರಣ : ಡಿಸೆಂಬರ್ 1992



**ಬೆಲೆ : ರೂ. 6.**

ರಕ್ಷಾಪುಟ-ಚಿತ್ರಗಳು : ಗುಜ್ಜಾರಪ್ಪ

ಪ್ರಕಾಶಕರು :
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-560 001

0212920415 ISBN 81-7302-047-7

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications Pvt. Ltd., 11, Crescent Road, Bangalore-560 001. Typeset at Laser Script, Bangalore-560 003

## ಈಜುಗೊಳದ ನಡುವೆ

ಬೇಸಿಗೆಯ ಬಿಡುವು; ಪಾಪು ಬೇಬಿ ಆಡುತ್ತ ಆಡುತ್ತ ಮನೆಯಿಂದ ದೂರ ಬಂದಿದ್ದರು. ಹತ್ತಿರವೇ ಈಜುಕೊಳ. ಕೈಕಾಲು ತೊಳೆದುಕೊಳ್ಳಲು ಅಲ್ಲಿ ಹೋದರು. ಪಕ್ಕದ ಬಯಲಿನಲ್ಲಿ ದಣಿವಾರಿಸಿಕೊಳ್ಳುತ್ತ ಕುಳಿತರು. ಮೋತಿ ಹಾರಾಡುತ್ತಿದ್ದ ಹುಳುಗಳ ಬೇಟೆಯಾಡತೊಡಗಿತ್ತು. ಬೇಬಿಗೆ ನಿದ್ದೆ ಬರತೊಡಗಿತ್ತು.

ಎದುರಿಗೆ ಮಾವಿನ ಮರಗಳ ತೋಪು. ಮಾವಿನ ಕಾಯಿ ಸುರಿದಿದ್ದವು. ಪಾಪು ಅವುಗಳನ್ನೇ ನೋಡತೊಡಗಿದ್ದ; ಬಾಯಲ್ಲಿ ನೀರೂರಿತ್ತು. ಒಂದೆರಡು ಕಾಯಿಗಳನ್ನು ಕಲ್ಲಿನಿಂದ ಉದುರಿಸಬೇಕೆಂಬ ಚಪಲ. ಉಪ್ಪು ಖಾರ ಹಚ್ಚಿಕೊಂಡು ತಿಂದರೆ ಎಷ್ಟು ರುಚಿ!

ಪಾಪು ಒಂದು ಕಲ್ಲನ್ನು ಗುರಿಯಿಟ್ಟು ಬೀಸಿದ. ಕಾಯಿ ಬೀಳಲಿಲ್ಲ. ಯಾರಾದರೂ ನೋಡಿದರೆ ಹೇಗೆಂಬ ಭಯ ಬೇರೆ. ಧೈರ್ಯ ಮಾಡಿ ಇನ್ನೊಂದು ಕಲ್ಲನ್ನು ಎತ್ತಿಕೊಂಡ.

ಇನ್ನೇನು ಗುರಿಯಿಡಬೇಕು. ಅಷ್ಟರಲ್ಲಿ ಈಜುಗೊಳದ ನಡುವೆ ನೀರು ಮೇಲೆ ಬಂದು ದೊಡ್ಡ ತತ್ತಿಯಂಥದು ಏನೋ ಕಂಡಿತು.

ಅದು ಒಂದು ಕಾರಿನಂತೆ ದೊಡ್ಡದಿತ್ತು. ಪಾಪು ಕಣ್ಣುಜ್ಜಿ ಮತ್ತೊಮ್ಮೆ ನೋಡಿದ. ಅದು ಅಲ್ಲಿಯೇ ಇದ್ದಿತು!

ಪಾಪು ಹೆದರಿ ನಡುಗಿದ. ಬೇಬಿಯನ್ನು ಮರೆತು ಕಾಲಿಗೆ ಬುದ್ಧಿ ಹೇಳಿದ. ಒಂದು ಮಾವಿನ ಮರದ ಹಿಂದೆ ಅಡಗಿಕೊಂಡು ಆ ವಾಹನವನ್ನೇ ನೋಡತೊಡಗಿದ. ಅದು ಒಂದು ವಿಚಿತ್ರ ವಾಹನವೆಂದು ಪಾಪು ಊಹಿಸಿದ.

ತೂಕಡಿಸುತ್ತಿದ್ದ ಬೇಬಿ ಎಚ್ಚರಾದಳು. ಸದ್ದಿಲ್ಲದೇ ಬಂದ ಆ ವಾಹನವನ್ನೇ ದಿಟ್ಟಿಸಿ ನೋಡತೊಡಗಿದಳು. ನೀರ ಮೇಲೆ ನಿಂತಿದ್ದರಿಂದ ಆ ವಾಹನವನ್ನು ಕನಸಿನಲ್ಲಿಯೇ ನೋಡುತ್ತಿರುವುದಾಗಿ ಬೇಬಿ ಭ್ರಮಿಸಿದಳು.

ಆ ವಾಹನವು ಸರ್ರೆಂದು ಸರಿದು ನೆಲದ ಮೇಲೆ ಬಂದು ಬೇಬಿಯ ಪಕ್ಕಕ್ಕೆ ನಿಂತಿತು. ಅದರಲ್ಲಿಂದ ಇಬ್ಬರು ಇಳಿದರು. ಅವರು ಬಹಳ ಚೆಲುವಾಗಿದ್ದರು. ಇಬ್ಬರೂ ಹೊಳೆಹೊಳೆಯುವ ಬಟ್ಟೆ ಧರಿಸಿದ್ದರು. ವಿಚಿತ್ರ ಹೆಲ್ಮೆಟ್ ಹಾಕಿಕೊಂಡಿದ್ದರು. ಎರಡು ಮೀಟರಿಗಿಂತ ಎತ್ತರವಿದ್ದರು. ಬೇರೆ ಲೋಕದಿಂದ ಬಂದವರಂತೆ ಕಾಣುತ್ತಿದ್ದರು. ಗಂಡ-ಹೆಂಡತಿ ಎಂದು ಬೇಬಿಗೆ ಹೊಳೆಯಿತು. ಆದರೆ ಇವರು ಎಲ್ಲಿಂದ ಬಂದರೆಂದು ಗೊತ್ತಾಗಲಿಲ್ಲ.

'ಹೆಲೋ! ನಾನು ಭೂರಾ ಅಂತ. ಈಕೆ ನನ್ನ ಹೆಂಡತಿ ವಲ್ಲರಿ,' ಎಂದು ಬಂದಾತ ಪರಿಚಯ ಹೇಳಿಕೊಂಡರು.

ಬೇಬಿಗೆ ಭಯವೇನೂ ಆಗಿರಲಿಲ್ಲ. ಇವೆಲ್ಲ ಕನಸಿನಲ್ಲಿ ಎಂದು ತಿಳಿದಿದ್ದಳಷ್ಟೇ. ''ವೆಲ್‌ಕಮ್! ನಾನು ಬೇಬಿ, ಇವನು ನಮ್ಮ ಮೋತಿ ಮತ್ತು ನನ್ನ ಅವಳಿ ಪಾಪು ಕೂಡ ಇದ್ದಾನೆ'' ಎಂದು ಹೇಳಿದಳು.

ಏನೋ ನೆನಪಾದಂತೆ, ''ಹೌದು ಅಂಕಲ್, ನೀವು ಎಲ್ಲಿಂದ ಬಂದಿರಿ? ಇದೆಂಥ ಗಾಡಿ?'' ಎಂದು ಕೇಳಿದಳು.

ಬೇಬಿ ವಾಹನದವರೊಡನೆ ಮಾತಿಗೆ ನಿಂತಿದ್ದನ್ನು ಪಾಪು ಮರೆಯಿಂದಲೇ ನೋಡಿದ. ತನ್ನ ಅಂಜುಬುರಕತನಕ್ಕಾಗಿ ನಾಚಿಕೆಯೆನಿಸಿತು. ಭರಭರನೆ ಆ ವಾಹನದ ಹತ್ತಿರ ಬಂದ. ಮೋತಿ ಈ ವಾಹನದವರನ್ನು ಮೂಸಿ ನೋಡಿ ಆಗಲೇ ಗೆಳೆತನ ಮಾಡತೊಡಗಿತ್ತು.

''ನಾವು ಎಲ್ಲಿಂದಲೂ ಬಂದಿಲ್ಲ ಬೇಬಿ,'' ವಲ್ಲರಿ ಹೇಳತೊಡಗಿದ್ದರು. ''ಇದ್ದಲ್ಲೇ ಇದ್ದೇವೆ, ನಿಮಗೆ ಆಶ್ಚರ್ಯವಾಗಿರಬೇಕು - ಅಲ್ಲವೇ?''

''ನಿಜ ಹೇಳಬೇಕೆಂದರೆ ನಾವು ಇಪ್ಪತ್ತೆರಡನೆಯ ಶತಮಾನದವರು,''ಎಂದರು ಭೂರಾ.

''ಅಂಕಲ್, ಹಾಗಾದರೆ ನೀವು ಹುಟ್ಟಿಯೇ ಇಲ್ಲ. ಹೇಗೆ ಬಂದಿರಿ?''ಎಂದು ಪಾಪು ಕೇಳಿದ.

''ಕನಸಿನಲ್ಲಿ ಏನು ಬೇಕಾದರೂ ನಡೆಯುತ್ತದೆಯೋ ಪಾಪೂ!''ಎಂದು ಬೇಬಿ ಹೇಳಿದಳು.

ಪಾಪು ಗಟ್ಟಿಯಾಗಿ ನಕ್ಕ ''ಅದಕ್ಕೇ ಇಷ್ಟು ಧೈರ್ಯದಿಂದ ನಿಂತೀ! ಇದು ಕನಸಲ್ಲ ಬೇಬಿ, ಪೂರಾ ಎಚ್ಚರಾಗಿ ಕಣ್ಣು ಬಿಟ್ಟು ನೋಡು,'' ಎಂದು ಪಾಪು ಆಕೆಯ ಕೈ ಚಿವುಟಿದ.

'ಹಾ!' ಎಂದು ಬೇಬಿ ನರಳಿದಳು.

''ಹೌದೋ ಪಾಪು. ಕನಸಾಗಿದ್ದರೆ ಚಿವುಟಿದ್ದು ಗೊತ್ತೇ ಆಗಬಾರದು. ಅಂದರೆ... ? ಡ್ಯಾಡಿ! ಮಮ್ಮಿ!'' ಎಂದು ಭಯದಿಂದ ಚೀರುತ್ತ ಓಡತೊಡಗಿದಳು.

ಪಾಪು ಆಕೆಯನ್ನು ಬೆನ್ನಟ್ಟಿ ಕರೆದುಕೊಂಡು ಬಂದು, ''ಬೇಬಿ ಈ ಅಂಕಲ್ ಆಂಟಿ ಬಹಳ ಒಳ್ಳೆಯವರೆಂದು ಕಾಣುತ್ತದೆ''ಎಂದು ಧೈರ್ಯ ಕೊಟ್ಟ.

''ಮಕ್ಕಳೇ, ನೀವು ಬೆದರಿದ್ದು ಸಹಜ. ನಮ್ಮದು ಕಾಲ ನೌಕೆ, ನಾವೇ ಇದನ್ನು ರಚಿಸಿದ್ದೇವೆ. ನಾವು ಕಾಲಯಾನಿಗಳು,'' ಎಂದು ವಲ್ಲರಿ ವಿವರಿಸಿದರು.

''ನಿಮ್ಮ ಶತಮಾನಕ್ಕೂ ನಮ್ಮದಕ್ಕೂ ಬಹಳ ವ್ಯತ್ಯಾಸವಿಲ್ಲ,'' ಭೂರಾ ಹೇಳಿದರು. ''ಆದ್ದರಿಂದ ಪ್ರಾಚೀನ ಕಾಲಕ್ಕೆ ಹೋಗೋಣ ಬನ್ನಿರಿ. ''

ಪಾಪು - ಬೇಬಿಯುವರಿಗೆ ಸಂತೋಷವಾಯಿತು.

''ಅಂಕಲ್ ನಮಗೇನೋ ಬರುವ ಮನಸ್ಸಿದೆ, ಆದರೆ ಡ್ಯಾಡಿ-ಮಮ್ಮಿ ಬಿಡಬೇಕಲ್ಲ?''ಎಂದು ಪಾಪು ಹೇಳಿದ.

ಬೇಬಿ ಈಗ ಸಮಯವೆಷ್ಟು? ಮಧಾಹ್ನ 1.30 ಆಗಿದೆಯಷ್ಟೇ. ನಾವು ತಿರುಗಿ ನಿಮ್ಮನ್ನು ಇದೇ ಕಾಲಕ್ಕೆ ತಂದು ಬಿಟ್ಟರಾಯಿತಲ್ಲ?'' ಎಂದು ವಲ್ಲರಿ ಮಾತು ಕೊಟ್ಟರು.

''ಅದು ಹೇಗೆ ಸಾಧ್ಯ?'' ಪಾಪು ತಕರಾರು ಮಾಡಿದ.

''ಎಂಥಾ ಹುಚ್ಚನೋ ನೀನು?''ಬೇಬಿ ನಕ್ಕು ಗೇಲಿ ಮಾಡಿದಳು. ''ಇವರು ಕಾಲದಲ್ಲಿ ತಿರುಗಾಡುವರೆಂದು ನೆನಪು ಇಟ್ಟುಕೋ. ನಾವು ಯಾವ ಊರಿಗೆ ಹೋದರೂ ಮತ್ತೆ ನಮ್ಮ ಊರಿಗೇ ತಿರುಗಿ ಬರುವುದಿಲ್ಲವೇ? ಹಾಗೆ ಇವರು ಯಾವ ಕಾಲಕ್ಕೆ ಹೋದರೂ, ತಿರುಗಿ ಈ ಹೊತ್ತಿಗೇ ಬಂದುಬಿಡುತ್ತಾರೆ ಬಿಡು. ಅದಕ್ಕೇಕೆ ಹೆದರಿಕೆ?''

## 2. ಪೆಡಂಭೂತಗಳ ಕಾಲಕ್ಕೆ

ಕಾಲನೌಕೆ ಬಿಸಿಲಿನಲ್ಲಿ ಥಳಥಳ ಹೊಳೆಯುತ್ತಿತ್ತು. ಅದರ ತಲೆಯ ಮೇಲೆ ಆರು ಆ್ಯಂಟೆನಾಗಳಿದ್ದವು. ಸುತ್ತಲೂ ಕಿಂಡಿಗಳಿದ್ದವು. ಅವುಗಳಿಂದ ತರಹಾವರಿ ಬೆಳಕು ಹೊಮ್ಮುತ್ತಿತ್ತು.

ಮೂವರೂ ಕಾಲನೌಕೆಯೊಳಗೆ ಕಾಲಿಟ್ಟರು. ಏಳೆಂಟು ಜನರು ಆರಾಮವಾಗಿ ಕುಳಿತುಕೊಳ್ಳಲು ಒಳಗೆ ಜಾಗೆಯಿತ್ತು. ಭೂರಾ ಮಕ್ಕಳಿಗೆ ತಮ್ಮ ಕಾಲನೌಕೆಯ ವಿವರಗಳನ್ನು ತೋರಿಸಿದರು.

ಡ್ಯಾಷ್ ಬೋರ್ಡ್, ಅದರಲ್ಲಿ ಅನೇಕ ಗುಂಡಿಗಳು ಮತ್ತು ಮೀಟರುಗಳು. ಸ್ಪೀಡೋಮೀಟರಿನ ಬದಲು ಕ್ರೋನೋಮೀಟರು - ಅಂದರೆ ಕಾಲ ಸರಿದ ವೇಗಮಾಪಕ ಇದ್ದಿತು. ಇಂಥ ನಾಲ್ಕಾರು ಮೀಟರುಗಳಿದ್ದವು. ಒಂದರಲ್ಲಿ ಬರೀ ದಿನಗಳಿದ್ದರೆ, ಇನ್ನೊಂದರಲ್ಲಿ ವರ್ಷಗಳಿದ್ದವು. ಮೂರನೆಯದರಲ್ಲಿ ಶತಮಾನಗಳನ್ನು ಸೂಚಿಸಿದ್ದರೆ, ನಾಲ್ಕನೆಯದರಲ್ಲಿ ಸಾವಿರ ವರ್ಷಗಳ ಲೆಕ್ಕ. ಐದನೆಯದರಲ್ಲಿ ಲಕ್ಷ ಹೀಗೇ ಆಶ್ಚರ್ಯವೆಂದರೆ ಕೋಟಿ ವರ್ಷಗಳ ಮೀಟರೂ ಇದ್ದಿತು.

‘‘ಅಂಕಲ್, ನಿಮ್ಮ ಕಾಲನೌಕೆಯಲ್ಲಿ ಕೋಟಿ ವರ್ಷ ಹಿಂದೆ ಹೋಗಬಹುದೇ?’’ಎಂದು ಬೇಬಿ ಕೇಳಿದಳು.

‘‘ಓಹೋ! ಅವಶ್ಯಕವಾಗಿ,’’ ಎಂದು ಭೂರಾ ಉತ್ತರಿಸಿದರು.

‘‘ಭವಿಷ್ಯಕ್ಕೆ ಹೋಗಬೇಕಾದರೆ?’’ ಎಂದು ಪಾಪು ಕೇಳಿದ.

‘‘ಸರಿಯಾದ ಪ್ರಶ್ನೆ,’’ ಭೂರಾ ತಿಳಿಸಿದರು, ‘‘ನಮ್ಮ ಈ ನೌಕೆ ಬಹಳವೆಂದರೆ ನಮ್ಮ ಕಾಲಕ್ಕೆ ಹೋಗಬಹುದು - ಅಂದರೆ ಇಪ್ಪತ್ತೆರಡನೆಯ ಶತಮಾನಕ್ಕೆ. ಸದ್ಯ ಭೂತಕಾಲಕ್ಕೆ ಹೋಗಿ

ವಾಪಸಾಗುವುದನ್ನು ಮಾತ್ರ ಕಂಡು ಓಡಿದಿದ್ದೇವೆ. ಈಗ ಯಾವ ಕಾಲಕ್ಕೆ ಹೋಗೋಣ?''

''ಆಂಟೀ, ನಮ್ಮನ್ನು ಇತಿಹಾಸಕ್ಕೆ ಕರೆದುಕೊಂಡು ಹೋಗಿರಿ. ನಮ್ಮ ಟೀಚರು ಕಲಿಸಿದ ಇತಿಹಾಸ ತಿಳಿಯುವದೇ ಇಲ್ಲ. ಸುಮ್ಮನೆ ಪುಸ್ತಕದಲ್ಲಿ ಬರೆದಿರುತ್ತಾರೆ; ಇಲ್ಲದಿದ್ದರೆ ಚಿತ್ರಗಳಲ್ಲಿ ತೋರಿಸುತ್ತಾರೆ,'' ಎಂದನು ಪಾಪು.

''ಹೌದು ಅಂಕಲ್, ನಂಗೆ ಅಶೋಕ ಚಕ್ರವರ್ತಿ ಕೂಡ ಮಾತನಾಡಬೇಕಾಗಿದೆ. ಕಿತ್ತೂರು ಚೆನ್ನಮ್ಮನನ್ನು ನೋಡಬೇಕಾಗಿದೆ!'' ಎಂದಳು, ಬೇಬಿ ಹುರುಪಿನಿಂದ.

''ಅವರನ್ನೆಲ್ಲ ಆಮೇಲೆ ನೋಡುವ, ಮೊದಲು ಪೆಡಂಭೂತಗಳ ಕಾಲಕ್ಕೆ ಹೋಗೋಣ'' ಎಂದು ಭೂರಾ ಮಕ್ಕಳಿಗೆ ಹೇಳಿ ''ಏನೆನ್ನುತ್ತೀ ಡಾರ್ಲಿಂಗ್,'' ಎಂದು ಹೆಂಡತಿಯ ಅಭಿಪ್ರಾಯ ಕೇಳಿದರು.

''ಅದೇ ಸರಿ,'' ಎಂದರು ವಲ್ಲರಿ.

''ಏಕೋ ನಿಮ್ಮ ಆಂಟೀ 'ಹೂಂ'ಎಂದಳು,'' ಭೂರಾ ಜೋಕು ಮಾಡಿದರು ''ಏನು ಕೇಳಿದರೂ 'ಒಲ್ಲೇರೀ' ಎನ್ನುತ್ತಾಳೆ. ಅದಕ್ಕೇ ಆಕೆಗೆ ವಲ್ಲರಿ ಎಂದು ಹೆಸರಿಟ್ಟಿದ್ದೇನೆ.''

ಈ ಜೋಕಿಗೆ ಮಕ್ಕಳು ಹೊಟ್ಟೆ ತುಂಬ ನಕ್ಕರು. ನೌಕೆ ನಿಂತಿದ್ದಾಗ ದೀಪಗಳು ಹಳದಿ ಕಾಣುತ್ತಿದ್ದವು. ನೌಕೆ ಭೂತಕಾಲಕ್ಕೆ ಹೋಗುವಾಗ ಅವು ಕೆಂಪು ಬಣ್ಣದವಾಗುತ್ತಿದ್ದವು. ಮತ್ತು ಭವಿಷ್ಯತ್ತಿಗೆ ಹೋಗುವಾಗ ನೀಲಿ ಬಣ್ಣದವಾಗುತ್ತಿದ್ದವು.

ಭೂರಾ ದಿನಗಳ ಗುಂಡಿ ಒತ್ತಿದರು. ದೀಪಗಳೆಲ್ಲ ಹಳದಿ

ಹೋಗಿ ಕೆಂಪಗಾದವು. ಕಿಂಡಿಗಳಿಂದ (ಇವಕ್ಕೇ ಪೋರ್ಟ್‌ಹೋಲ್ ಎನ್ನುತ್ತಾರೆ) ಸುತ್ತಲಿನ ದೃಶ್ಯ ಇಣುಕಿ ನೋಡಿದರು.

ಹೊರಗೆ ಎಲ್ಲವೂ ಅಸ್ಪಷ್ಟವಾಯಿತು. ಸೂರ್ಯ ಪಶ್ಚಿಮದಿಂದ ಪೂರ್ವಕ್ಕೆ ಹೋಗತೊಡಗಿದ! ಮಧ್ಯಾಹ್ನ ಹೋಗಿ ಮುಂಜಾನೆ ಆಯಿತು. ಮುಂಜಾನೆ ಹೋಗಿ ರಾತ್ರಿ ಆಯಿತು. ರಾತ್ರಿ ಹೋಗಿ ಸಂಜೆಯಾಯಿತು....................

''ನಾನೊಂದು ಸಿನೆಮಾ ನೋಡಿದ್ದೆ ಅಂಕಲ್, ಪಾಪು ಹೇಳಿದ. ''ಅದರಲ್ಲಿ ರೀಲನ್ನು ತಿರುವು-ಮುರುವು ಓಡಿಸಿದ್ದರು. ಕಾರು ಹಿಂದೆ ಹೋಗುತ್ತಿದ್ದವು. .. . ಎಲ್ಲರೂ ಹಿಮ್ಮರಿಕೀ ನಡೆಯುತ್ತಿದ್ದರು. ... ಹಾಗೇ ಅಲ್ಲವೇ?''

''ಶಾಭಾಸ್ ಪಾಪೂ!'' ವಲ್ಲರಿ ಹೊಗಳಿದರು. ''ಈಗ ಕೂಡ ನಾವು ನಿನ್ನೆಗೆ ಮೊನ್ನೆಗೆ- ಹೋದ ವರ್ಷಕ್ಕೆ ಹೋಗುತ್ತಿದ್ದೇವೆ.''

''ಅಯ್ಯೋ! ಇನ್ನು ಸ್ವಲ್ಪ ವರ್ಷ ಹೋದರೆ ನಾವು ಕೂಸಾಗಿಬಿಡುತ್ತೇವಲ್ಲ?'' ಎಂದು ಬೇಬಿ ಗಾಬರಿಯಾಗಿ ಕೇಳಿದಳು.

''ಹೆದರಬೇಡಿರಿ. ಕಾಲನೌಕೆಯಲ್ಲಿದ್ದವರ ವಯಸ್ಸು ಹೆಚ್ಚು ಕಡಿಮೆಯಾಗುವುದಿಲ್ಲ,'' ಭೂರಾ ಭರವಸೆ ಕೊಟ್ಟರು. ''ನಾವು 22ನೆಯ ಶತಮಾನದಲ್ಲಿ ಇದ್ದಷ್ಟು ವಯಸ್ಸಿನವರೇ ಇಲ್ಲವೇ?''

''ಹೌದಲ್ಲ?''ಬೇಬಿ ಆಶ್ಚರ್ಯಪಟ್ಟಳು. ''ಇಲ್ಲದಿದ್ದರೆ ನೀವು ನಮಗಿಂತ ನೂರುವರ್ಷ ಸಣ್ಣವರು - ಆದರೂ ನೀವೇ ಅಂಕಲ್-ಆಂಟಿ, ಮತ್ತು ನಾವೇ ಮಕ್ಕಳಾಗಿದ್ದೇವೆ!''

ಪಾಪುವಿಗೂ ಈ ತರ್ಕ ವಿಚಿತ್ರವೆನಿಸಿ ತಲೆ ಜುಮ್ಮೆಂದಿತು. ಮೋತಿ ಮಾತ್ರ ಇದಾವ ಲೆಕ್ಕವನ್ನೂ ತಲೆಗೆ ಹಚ್ಚಿಕೊಳ್ಳದೆ ಹಿಂದೆ ಸೀಟಿನಲ್ಲಿ ಬಿದ್ದುಕೊಂಡಿತ್ತು.

ಭೂರಾ ಒಮ್ಮೆಲೆ ಕೋಟಿ ವರ್ಷಗಳ ಗುಂಡಿ ಒತ್ತಿದರು! ಈಗ ಡಯಲಿನ ಮೇಲೆ ಒಂದು ಕೋಟಿ ಎರಡು ಕೋಟಿ. .. .. . ಹೀಗೆ ಮುಳ್ಳು ಸರಿಯತೊಡಗಿತು.

ಮುಳ್ಳು ಎಂಟು ಕೋಟಿ ವರ್ಷ ತೋರಿಸಿದಾಗ ಭೂರಾ ಆಫ್ ಬಟನ್ ಒತ್ತಿದರು. ಕಾಲನೌಕೆ ನಿಂತಿತು. ಕೆಂಪು ದೀಪ ಬಟನ್ ಹಳದಿಗೆ ತಿರುಗಿದವು.

''ಬನ್ನಿರಿ ಮಕ್ಕಳೇ, ಈಗ ನಾವು ಪೆಡಂಭೂತಗಳನ್ನು ಭೇಟಿಯಾಗೋಣ,'' ಎಂದರು ವಲ್ಲರಿ.

''ಒಮ್ಮೆಲೆ ನೌಕೆಯಿಂದ ಯಾರೂ ಕೆಳಗೆ ಇಳಿಯಬೇಡಿರಿ. ಮೊದಲು ಪೋರ್ಟ್‌ಹೋಲುಗಳಿಂದಲೇ ಎಲ್ಲವನ್ನೂ ನೋಡೋಣ. ಆಮೇಲೆ ಎಚ್ಚರದಿಂದ ಇಳಿಯೋಣ'' - ಎಂದು ಭೂರಾ ಎಚ್ಚರಿಸಿದರು.

ಸುತ್ತಲಿನ ನೋಟ ಬೆರಗುಗೊಳಿಸುವಂಥದು! ಭಾರೀ ಅಡವಿ. ಆದರೆ ವಿಚಿತ್ರ ಗಿಡಮರಗಳು. ಮತ್ತು ನಮ್ಮ ಗುಬ್ಬಿ ಕಾಗೆಗಳಂಥ ಹಕ್ಕಿಗಳೇ ಇರಲಿಲ್ಲ! ಹೋಗಲಿ. ನಮ್ಮ ಜಿಂಕೆ-ಹುಲಿಗಳಂಥ ಪ್ರಾಣಿಗಳೂ ಇಲ್ಲ.

''ಅಂಕಲ್ ಇದು ಯಾವ ಲೋಕ?'' ಎಂದು ಪಾಪು ನಂಬಿಕೆ ಹುಟ್ಟದೆ ಕೇಳಿದನು.

''ನಮ್ಮದೇ ಕಣೋ,'' ಭೂರಾ ನಗುತ್ತ ಹೇಳಿದರು. ''ನಮಗೆ ಗೊತ್ತಿದ್ದ ಗಿಡಗಂಟಿಗಳಾಗಲೀ, ಪಶುಪಕ್ಷಿಗಳಾಗಲೀ, ಇನ್ನೂ ವಿಕಾಸವಾಗಿಲ್ಲ. ಇದು ಡೈನೋಸಾರ್ ಅಥವಾ ಪೆಡಂಭೂತಗಳ ಯುಗ.''

‘‘ನಾನೊಲ್ಲೆನಪ್ಪಾ!’’ ಬೇಬಿ ಭಯದಿಂದ ಕಣ್ಣುಮುಚ್ಚಿಕೊಂಡು ಹೇಳಿದಳು. ‘‘ಬೇರೆ ಕಾಲಕ್ಕೆ ಹೋಗೋಣ.’’

‘‘ಹೆದರಬೇಡಿರಿ ಮಕ್ಕಳೇ,’’ ಭೂರಾ ಧೈರ್ಯ ಕೊಟ್ಟರು. ‘‘ಹಾಗೇನಾದರೂ ಗಂಡಾಂತರ ಬಂದರೆ ಕಾಲನೌಕೆಯಲ್ಲಿ ಹೋಗಲು ಬರುತ್ತದಲ್ಲ?’’

## 3. ಮೀಟಿಂಗು

‘‘ಪಾಪು, ಬೇಬಿ! ನಾವೀಗ ಎಂಟು ಕೋಟಿ ವರ್ಷ ಹಿಂದೆ ಹೋಗಿ ದಣಿದಿದ್ದೇವೆ,’’ ಭೂರಾ ಹೇಳಿದರು. ‘‘ಅವಸರವೇನೂ ಇಲ್ಲ. ನಿಧಾನವಾಗಿ ಮೂರು ಕೆಲಸ ಮಾಡೋಣ.’’

‘‘ಏನದು ಅಂಕಲ್?’’ ಪಾಪು, ಬೇಬಿ! ಒಮ್ಮೆಲೇ ಕೇಳಿದರು. ಆಂಟಿ ಮತ್ತು ಮೋತಿ ಕೂಡ ಕುತೂಹಲದಿಂದ ಕಿವಿಗೊಟ್ಟರು.

‘‘ಒಂದು, ನಮ್ಮ ಈ ಅದ್ಭುತ ಸಾಧನೆಯ ಸವಿ ನೆನಪಿಗಾಗಿ ಸೆಲೆಬ್ರೇಟ್ ಮಾಡೋಣ.’’

‘‘ಓಹ್ಹೋ! ಹಬ್ಬ! ಹಬ್ಬ!!’’ ಪಾಪು ಕುಣಿದು ಕುಪ್ಪಳಿಸಿದ.

‘‘ನಡುವೆ ಬಾಯಿ ಹಾಕಬೇಡೋ ಪಾಪು’’ ಬೇಬಿ ಎಚ್ಚರಿಸಿದಳು. ಅವಳ ಕಣ್ಣೂ ಸಂತೋಷದಿಂದ ಮಿಂಚತೊಡಗಿದವು.

‘‘ಎರಡನೆಯದಾಗಿ, ಈ ಭೂತಕಾಲದಲ್ಲಿ ಏನೇನೋ ಸಾಹಸ-ಸಂಶೋಧನೆ ಮಾಡಬೇಕೆಂದು ಪ್ಲ್ಯಾನು ಮಾಡುವುದು,’’ ಭೂರಾ ಮುಂದುವರೆಸಿದರು. ‘‘ಮತ್ತು ಮೂರನೆಯದಾಗಿ ಆ

ಪ್ಲ್ಯಾನಿನಂತೆ ಎಲ್ಲ ಸಿದ್ಧತೆ ಮಾಡಿಕೊಂಡು ಕಾಲನೌಕೆಯಿಂದ ಹೊರಬೀಳುವುದು.''

''ಡಾರ್ಲಿಂಗ್, ಇದೇನು ಮೀಟಿಂಗ್?'' ವಲ್ಲರಿ ಆಂಟಿ ಕೇಳಿದರು. ''ನನಗಂತೂ ಹೊಟ್ಟೆ ಹಸಿದಿದೆ. ಮಕ್ಕಳಿಗೂ ಹಸಿದಿರಬಹುದು.''

''ಹೌದು ಮೀಟಿಂಗೇ,'' ಭೂರಾ ಒಪ್ಪಿಕೊಂಡರು. ಯಾವ ಸಾಹಸ ಯಾತ್ರೆಯಲ್ಲಾದರೂ ಹೀಗೆ ನಾಯಕನ ಮೀಟಿಂಗ್ ಮಾಡಿಯೇ ಸಾಹಸ ಪ್ರಾರಂಭಿಸಬೇಕು.''

''ಆಗಲಿ ನಾಯಕರೇ,'' ವಲ್ಲರಿ ಆಂಟಿ ಚೇಷ್ಟೆ ಮಾಡಿದರು.

''ಆದರೆ ಹತ್ತು ನಿಮಿಷಕ್ಕಿಂತ ಹೆಚ್ಚಾದರೆ ನಾವು ಕೇಳುವವರಲ್ಲ.''

''ಮೀಟಿಂಗಿನಲ್ಲಿ ಚಹಾ ಪಹಾ ಕುಡಿಯುತ್ತಾರಲ್ಲ?'' ಬೇಬಿ ಆಶೆಯಿಂದ ಕೇಳಿದಳು. ''ಈ ಮೀಟಿಂಗಿನಲ್ಲೂ ತಿನ್ನುತ್ತ ಕುಡಿಯುತ್ತ ಮಾತನಾಡಬಹುದು.''

ಆಂಟಿ ಮತ್ತು ಪಾಪು ಕೈ ಎತ್ತಿದರು. ''ನಮ್ಮದೇ ಮೆಜಾರಿಟಿ ರಾಯರೇ,'' ವಲ್ಲರಿ ಆಂಟಿ ಹೇಳಿದರು. ''ಮೊದಲು ತಿಂಡಿ-ತೀರ್ಥ ನಂತರ ಮೀಟಿಂಗ್.''

''ಆಗಲಿ, ಸೆಲೆಬ್ರೇಟ್ ಮಾಡಿಯೇ ಮೀಟಿಂಗ್ ಮಾಡೋಣ,'' ನಾಯಕ ಭೂರಾ ತೀರ್ಪಿತ್ತರು.

ಕಾಲನೌಕೆಯಲ್ಲಿ ಮೋಜೋ-ಮೋಜು! ಎಲ್ಲರೂ ಇಪ್ಪತ್ತೆರಡನೆಯ ಶತಮಾನದ- ಅಂದರೆ ನಮಗೆ ಗೊತ್ತೇ ಇರದ- ಬಗೆಬಗೆಯ ತಿಂಡಿ-ತಿನಿಸು ತಿಂದರು. ಪೇಯಗಳನ್ನು ಕುಡಿದರು.

ಮನರಂಜನೆಗಾಗಿ ಕಾಲನೌಕೆಯಲ್ಲಿದ್ದ ಕಂಪ್ಯೂಟರ್ ಸಂಗೀತ-ಸಿನೆಮಾ ನೋಡಿದರು.

''ಮೀಟಿಂಗ್ ಪ್ರಾರಂಭ!'' ಎಂದು ಅಂಕಲ್ ಭೂರಾ ಘೋಷಿಸಿದರು.

ಎಲ್ಲರೂ ಸಾಹಸದ ನಿರೀಕ್ಷೆಯಲ್ಲಿ ನಾಯಕರ ಮಾತುಗಳಿಗೆ ಕಿವಿಗೊಟ್ಟರು.

ಭೂರಾ ನಾಲ್ಕಾರು ಬ್ಯಾಡ್ಜ್‌ಗಳನ್ನು ಮತ್ತು ಪುಟ್ಟ ಪಿಸ್ತೂಲುಗಳನ್ನು ತೆಗೆದಿಟ್ಟುಕೊಂಡರು.

''ಈ ಬಿಲ್ಲೆಗಳಿವೆಯಲ್ಲ? ಇವಕ್ಕೆ ಟ್ರಾರೀ ಎನ್ನುತ್ತಾರೆ. ಇವನ್ನು ಕೊರಳಿನ ಸರದಲ್ಲಿ ಪೋಣಿಸಿ ಹಾಕಿಕೊಳ್ಳಿರಿ. ಇವು ಟೆಲಿಫೋನಿನಂತೆ ಕೆಲಸ ಮಾಡುತ್ತವೆ. ಮತ್ತು ಟೆಲಿವಿಷನ್‌ದಂತೆ ಕೂಡಾ,'' ಅಂಕಲ್ ಭೂರಾ ವಿವರಿಸತೊಡಗಿದರು.

''ನಾವೆಲ್ಲಾ ಬೇರ್ಪಟ್ಟರೂ, ಒಬ್ಬರೊಂದಿಗೆ ಮತ್ತೊಬ್ಬರು ಸಂಭಾಷಣೆ ನಡೆಸಬಹುದು. ಮತ್ತು ಇದರ ಪುಟ್ಟ ಸ್ಕ್ರೀನಿನಲ್ಲಿ ಒಬ್ಬರನ್ನೊಬ್ಬರು ನೋಡಬಹುದು. ಈ ಪಿಸ್ತೂಲುಗಳು ಆತ್ಮರಕ್ಷಣೆಗೆ. ನಿಮ್ಮ ಪಿಸ್ತೂಲುಗಳಂತೆ ಇವು ಗುಂಡು ಹಾರಿಸುವದಿಲ್ಲ. ಬದಲಿಗೆ ಲೇಸರ್ ಕಿರಣ ಬಿಡುತ್ತವೆ. ಇವನ್ನು ಸುಮ್ಮನೆ ಉಪಯೋಗಿಸಬೇಡಿರಿ. ಆಪತ್ತು ಬಂದರೆ ಮಾತ್ರ ಅದೂ ನನ್ನ ಅಪ್ಪಣೆ ಪಡೆದು.''

ಮಕ್ಕಳು ಉಸಿರು ಬಿಗಿ- ಹಿಡಿದು ನಾಯಕರ ಮಾತು ಕೇಳತೊಡಗಿದ್ದರು.

''ಮೋತಿಯ ಕೊರಳಿಗೂ ಒಂದು ಟ್ರಾರೀ ಕಟ್ಟಿರಿ ನಾ.......

ಯಕರೇ.'' ಆಂಟಿ ಹೇಳಿದರು. ''ಅಂದರೆ ಅವನು ಎಲ್ಲಿ ಹೋದರೂ ನಾವು ಅವನನ್ನು ನೋಡುತ್ತಿರಬಹುದು.''

''ಒಳ್ಳೆಯ ವಿಚಾರ,'' ಭೂರಾ ಒಪ್ಪಿಕೊಂಡು ಮುಂದುವರೆಸಿದರು. ''ಯಾರೂ ಒಂದೆರಡು ಕಿಲೋ ಮೀಟರಿಗಿಂತ ದೂರ ಹೋಗಬೇಡಿರಿ. ಮತ್ತು ಹೆಚ್ಚೆಂದರೆ ಮೂರು ತಾಸು ಮಾತ್ರ ಕೊಡುತ್ತೇನೆ. ಅಷ್ಟರೊಳಗೆ ಕಾಲನೌಕೆಗೆ ಮರಳಲೇಬೇಕು.''

ಹೀಗೇ ಇನ್ನಷ್ಟು ಹೊತ್ತು ಮೀಟಿಂಗು ನಡೆಯಿತು.

## 4. ಪೆಡಂಭೂತಗಳ ಹೋರಾಟ

ಮೀಟಿಂಗು ಮುಗಿದು ಎಲ್ಲ ಸಿದ್ಧತೆ ಮಾಡಿಕೊಂಡು ಒಬ್ಬೊಬ್ಬರೇ ಕಾಲನೌಕೆಯ ಹೊರಗೆ ಬಂದರು.

ರೊಯ್ಯೆಂದು ಗಾಳಿ ಬೀಸುತ್ತಿತ್ತು. ಸುತ್ತಲೂ ಕಾಡು. ಮುಗಿಲೇ ಕಾಣುತ್ತಿರಲಿಲ್ಲ. ಸೂರ್ಯ ಏರತೊಡಗಿದ್ದ. ಯಾರೂ ಎಂದೂ ಕೇಳಿರದ ಸದ್ದುಗಳು.

''ಮಕ್ಕಳೇ, ಹೆದರಬೇಡಿರಿ. ಪ್ರಾಚೀನ ಕಾಲದ ಈ ಪಕ್ಷಿಗಳು ರಾಕ್ಷಸರಂತೆ. ಅವುಗಳ ಕೂಗೂ ಅಷ್ಟೇ ಭಯಂಕರ. ಪೆಡಂಭೂತಗಳೂ ಅಷ್ಟೇ ಈ ಕಾಡಿನ ಹೊರಗೆ ಬಯಲಿನಲ್ಲಿ ಅವು ಸಿಗಬಹುದು. ನಮ್ಮ ಆನೆ ಏನೂ ಅಲ್ಲ- ಅಷ್ಟು ದೊಡ್ಡವವು,'' ಭೂರಾ ತಿಳಿಸತೊಡಗಿದರು.

''ಎಲ್ಲರೂ ಒಂದೊಂದು ದಿಕ್ಕಿಗೆ ಹೋಗೋಣ. ನಮ್ಮ ಪ್ಲ್ಯಾನಿನಂತೆ,'' ವಲ್ಲರಿ ಆಂಟಿ ಸೂಚಿಸಿದರು.

''ತಾಳಿರಿ. ಮೊದಲು ನಮ್ಮ ಧ್ವಜ ಆರೋಹಿಸೋಣ,'' ಭೂರಾ ನೆನಪು ಮಾಡಿಕೊಟ್ಟರು.

''ಹೌದಲ್ಲ? ಚಂದ್ರನ ಮೇಲೆ ಮೊದಲ ಸಲ ಮನುಷ್ಯ ಕಾಲಿಟ್ಟಾಗ ಧ್ವಜ ಹಾರಿಸಿದಂತಲ್ಲವೇ ಅಂಕಲ್?'' ಬೇಬಿ ಕೇಳಿದಳು.

''ತೇನ್‌ಸಿಂಗನು ಹಿಮಾಲಯದ ಮೇಲೆ ಬಾವುಟ ಹಾರಿಸಿದಂತೆ,'' ಪಾಪು ದನಿಗೂಡಿಸಿದನು.

ಆಂಟಿ ಇಬ್ಬರು ಮಕ್ಕಳಿಗೂ ಒಂದೊಂದು ಮುತ್ತುಕೊಟ್ಟರು.

22ನೆಯ ಶತಮಾನದ ಧ್ವಜವನ್ನು ಅಲ್ಲಿಯೇ ನೆಲದ ಮೇಲೆ ನೆಟ್ಟು ಎಲ್ಲರೂ ವಂದನೆ ಮಾಡಿದರು. ಮೋತಿ ಕೂಡ ಹಿಂಗಾಲುಗಳ ಮೇಲೆ ನಿಂತು ಸೆಲ್ಯೂಟ್ ಹೊಡೆಯಿತು. ಕಾಲನೌಕೆಯಲ್ಲಿ ರಾಷ್ಟ್ರಗೀತೆ ನುಡಿಸಿದರು. (22ನೆಯ ಶತಮಾನದಲ್ಲಿ ಕೂಡ ನಮ್ಮ ರಾಷ್ಟ್ರಗೀತೆ ಬದಲಾಗಿರಲಿಲ್ಲ)

ಮೊದಲೇ ಪ್ಲ್ಯಾನು ಮಾಡಿದಂತೆ ನಾಲ್ವರು ನಾಲ್ಕು ದಿಕ್ಕುಗಳತ್ತ ಹೊರಟರು. ಮೋತಿ ಮಾತ್ರ ಯಾವುದೋ ಪ್ರಾಣಿಯ ವಾಸನೆ ಹಿಡಿದು ಚಂಗನೆ ಜಿಗಿದು ಪೊದೆಗಳಲ್ಲಿ ಮರೆಯಾಯಿತು.

ಪಶ್ಚಿಮ ದಿಕ್ಕಿಗೆ ಹೊರಟಿದ್ದ ಪಾಪು ಸುಮಾರು ಅರ್ಧ ತಾಸು ಹಾಗೆಯೇ ನಡೆದ. ಟ್ರಾರೀಯಲ್ಲಿ ಮಿನಿಟಿಗೊಮ್ಮೆ ನೋಡುತ್ತ-ಮಾತನಾಡುತ್ತ ಸಾಗಿದ್ದ. ಅಂಕಲ್ ಕೊಟ್ಟ ಹೋಲೋ ಕ್ಯಾಮೆರಾದಿಂದ ಚಿತ್ರೀಕರಣ ಕೂಡ ಮಾಡತೊಡಗಿದ್ದ.

ಅಬ್ಬಾ! ಎಂಥ ದೊಡ್ಡ ಪಕ್ಷಿಗಳು! ಆಕಾಶದಲ್ಲಿ ಹಾರತೊಡಗಿದರೆ ವಿಮಾನದಂತೆ ಕಾಣುತ್ತಿದ್ದವು. ವಿಮಾನಕ್ಕಿಂತ

ಹೆಚ್ಚಾಗಿ ದೊಡ್ಡ ಪಟಗಳಂತೆ ಕಾಣುತ್ತಿದ್ದವು. ಆದರೆ ಇನ್ನೂ ಒಂದು ಪೆಡಂಭೂತವೂ ಕಣ್ಣಿಗೆ ಬಿದ್ದಿಲ್ಲ.

ದೂರದಲ್ಲಿ ಗುಡುಗಿದಂತೆ ಕೇಳಿತು. ಇದೇ ಪೆಡಂಭೂತವಿರಬಹುದೆ? ಪಾಪು ಸರಸರನೆ ಹೆಜ್ಜೆ ಹಾಕಿದನು. ಮುಂದೆ ದೊಡ್ಡ ಬಯಲು. ಅದರಾಚೆ ಗುಡ್ಡ.

ಅವನು ಕಂಡ ದೃಶ್ಯ ಯಾರ ಮೈಮೇಲಾದರೂ ಮುಳ್ಳು ಬರಿಸುವಂಥದು!

ಎರಡು ಪೆಡಂಭೂತಗಳೂ ಭಯಂಕರ ಸಿಟ್ಟಿನಿಂದ ಕಾದಾಡುತ್ತಿವೆ!

ಅಂಕಲ್ ಕೊಟ್ಟ ಡೈನೊಸಾರ್ಸ್ ಕೈಪಿಡಿ ನೋಡಿದ. ಅದರಲ್ಲಿ ಎಡಕ್ಕಿದ್ದದ್ದು ಬ್ರೋಂಟೋಸಾರಸ್ ಮತ್ತು ಬಲಕ್ಕಿದ್ದದ್ದು ಟಿರನ್ನೋಸಾರಸ್!

ಎರಡು ಪೆಡಂಭೂತಗಳೂ ಒಂದೊಂದು ಮನೆಯಷ್ಟು ದೊಡ್ಡವಿದ್ದರೂ, ಟಿರನ್ನೋಸಾರಸ್ ಮಾತ್ರ ಹೆಚ್ಚು ಕ್ರೂರ!

‘‘ಹಲೋ ಪಾಪೂ, ಹೆದರಬೇಡ, ಬೆಸ್ಟ್ ಆಫ್ ಲಕ್! ಇನ್ನಷ್ಟು ಮುಂದೆ ಹೋಗಿ ಸಮೀಪದಿಂದ ಮೂವೀ ಶೂಟ್ ಮಾಡು ಅವಕ್ಕೇನು ದೊಡ್ಡ ಮಿದುಳಿಲ್ಲ. ನಿನ್ನನ್ನು ಬೆನ್ನತ್ತುವಷ್ಟು ತಿಳುವಳಿಕೆ ಇಲ್ಲ’’ ಎಂದು ಅಂಕಲ್ ಟ್ರಾನ್ಸೀವರ್‌ನಲ್ಲಿ ಮಾತನಾಡಿ ಹುರಿದುಂಬಿಸಿದರು.

ಬೇರೆ ಬೇರೆ ಬಟನ್ ಒತ್ತಿ ಪಾಪೂ ನೋಡಿದ : ಬೇಬಿ ಇನ್ನೂ ಅಡವಿಯಲ್ಲೇ ಇದ್ದಾಳೆ. ಒಂದು ಹಳ್ಳದ ಹತ್ತಿರ ನಿಂತಿದ್ದಾಳೆ. ಅಂಕಲ್ ದೊಡ್ಡ ಮರವೇರಿ ಯಾವುದೋ ಹಕ್ಕಿಯ ತತ್ತಿ

ಎತ್ತಿಕೊಳ್ಳುತ್ತಿದ್ದಾರೆ. ಆಂಟಿ ಒಂದು ಗಿಡದ ಕೆಳಗೆ ಕುಳಿತು ಅಲ್ಲಿ ಕ್ರಿಮಿಕೀಟಗಳ ಮೂವೀ ತೆಗೆದುಕೊಳ್ಳುತ್ತಿದ್ದಾರೆ: ಮತ್ತು ಮೋತಿ?

ಮೋತಿ ಒಂದು ಪೆಡಂಭೂತದ ಬೆನ್ನೇರಿ ಸವಾರಿ ಮಾಡತೊಡಗಿದೆ!

ಮೋತಿಗಿಂತ ತಾನೇನು ಕಡಿಮೆ? ಪಾಪು ಬೆದರದೆ ಅಡವಿ ದಾಟಿ ಪೆಡಂಭೂತಗಳ ಹತ್ತಿರ ಬಂದ.

ಆ ರಾಕ್ಷಸ ಪ್ರಾಣಿಗಳ ಕದನ ಘೋರವಾಗಿತ್ತು. ಅವು ಬಾಲ ಮತ್ತು ಹಿಂಗಾಲುಗಳ ಆಧಾರದ ಮೇಲೆ ನಿಂತರೆ ತಲೆ ತೆಂಗಿನ ಗಿಡದಂತೆ ಎತ್ತರಕ್ಕೇರುತ್ತಿತ್ತು. ಮತ್ತು ಅವು ಬಾಲ ಅಪ್ಪಳಿಸಿದರೆ ಭೂಕಂಪವಾದಂತೆ ನೆಲ ಅದುರುತ್ತಿತ್ತು. (ಮೋತಿ ಸವಾರಿ ಮಾಡಿದ ಪೆಡಂಭೂತವು ದೊಡ್ಡದಿದ್ದರೂ ಬಹಳ ಸಾಧು ಜಾತಿಯದಾಗಿತ್ತು).

ಇವುಗಳ ಹೋರಾಟದ ಸಿನೆಮಾ ತೆಗೆಯುತ್ತಾ ಪಾಪು ಮೈಮರೆಯುತ್ತಿದ್ದ. ನೆಲದ ಮೇಲೆ ಕತ್ತಲೆ ಕವಿದಂತಾಯಿತು. ಒಂದು ಭಾರಿ ಪಕ್ಷಿಯು ಪಾಪುವಿನ ತಲೆಯ ಮೇಲಿಂದಲೇ ಹಾರಿ ಹೋಯಿತು! ಅದೇ ಟೆರೌನಾಡಾನ್ ಎಂದು ಪಾಪು ಊಹಿಸಿದ.

ಆ ರಾಕ್ಷಸ ಪಕ್ಷಿ ನೆಟ್ಟಗೆ ಕಾಳಗದ ಕಣಕ್ಕೆ ಹೋಯಿತು. ಒಮ್ಮೆ ಬ್ರೋಂಟೋಸಾರಸ್ಸದ ತಲೆ ಕುಕ್ಕಿದರೆ, ಇನ್ನೊಮ್ಮೆ ಟೆರನ್ನೋಸಾರಸ್ಸನ್ನು ರೆಕ್ಕೆಯಿಂದ ಹೊಡೆಯಿತು. ಅದು ಯಾವ ಪಕ್ಷ ವಹಿಸಿತೋ ತಿಳಿಯಲೇ ಇಲ್ಲ.

ಈ ಯುದ್ಧ ನಿಲ್ಲುವ ಲಕ್ಷಣಗಳೇ ಕಾಣಲಿಲ್ಲ. ಆಗಲೇ ಒಂದು ತಾಸು ಕಳೆದಿದೆ. ತಿರುಗಿ ಹೋದರಾಯಿತೆಂದು ಪಾಪು ಹೊರಳಿದನು.

ಹಿಂದಿನಿಂದ ಭರ್ರನೆ ಗಾಳಿ ಬೀಸಿದಂತಾಯಿತು. ತಿರುಗಿ

ನೋಡುತ್ತಾನೆ- ರಾಕ್ಷಸ ಪಕ್ಷಿ! ಅದೀಗ ಆ ಪೆಡಂಭೂತಗಳನ್ನು ಬಿಟ್ಟು ಪಾಪುವಿನತ್ತ ಬರತೊಡಗಿತ್ತು!

ಅಂಕಲ್ ಭೂರಾರ ಅಪ್ಪಣೆ ಕೂಡ ತೆಗೆದುಕೊಳ್ಳದೆ ಪಾಪು ಲೇಸರ್ ಪಿಸ್ತೂಲನ್ನು ತೆಗೆದು ಅದರತ್ತ ಗುರಿ ಇಟ್ಟನು. ಟ್ರಾನ್ಸೀಯಲ್ಲಿ ಅಂಕಲ್ ಧ್ವನಿ ಕೇಳಿಸಿತು.

''ಹಲೋ ಪಾಪು, ಪಿಸ್ತೂಲು ಹಾರಿಸು! ಆ ಪಕ್ಷಿ.... ''

ಮುಂದೇನಾಯಿತೋ ಗೊತ್ತಿಲ್ಲ. ಪಾಪು ತನಗೇ ಗೊತ್ತಿಲ್ಲದಂತೆ ಪಿಸ್ತೂಲು ಹಾರಿಸಿದ್ದ. ಆ ರಾಕ್ಷಸ ಪಕ್ಷಿ ನೋವಿನಿಂದ ಕೂಗುತ್ತ ರೆಕ್ಕೆ ಧಡಪಡಿಸಿ ನೆಲಕ್ಕೆ ಧೊಪ್ಪೆಂದು ಬಿದ್ದಿತು!

ಪಾಪೂನ ಕೈಕಾಲೂ ಥರಥರ ನಡುಗತೊಡಗಿದ್ದವು. ಗಂಟಲು ಒಮ್ಮೆಲೆ ಒಣಗಿತ್ತು. ನಿಲ್ಲಲು ಸಾಧ್ಯವಾಗದೆ ಅಲ್ಲಿಯೇ ಕುಸಿದು ನೆಲಕ್ಕೆ ಬಿದ್ದ. ಆದರೆ ಅಪಾಯವೇನೂ ಆಗಿರಲಿಲ್ಲ.

## 5. ಆದಿಮಾನವನ ಕಾಲಕ್ಕೆ

''ಅಂಕಲ್, ಬರೀ ಪೆಡಂಭೂತ ನೋಡಿ ಸಾಕಾಯಿತು. ಇತಿಹಾಸ ನೋಡೋಣ,'' ಬೇಬಿ ಸೂಚಿಸಿದಳು.

ಈಗ ಎಲ್ಲರೂ ಮರಳಿ ಕಾಲನೌಕೆಗೆ ಬಂದಿದ್ದರು. ಭೂರಾ ಹೋಗಿ ಮೋತಿಯನ್ನೂ ಕರೆದುಕೊಂಡು ಬಂದಿದ್ದರು. ಪಾಪು ಎಷ್ಟೋ ಸುಧಾರಿಸಿಕೊಂಡಿದ್ದ.

''ನಾನೊಲ್ಲೆ ಅಂಕಲ್! ತಿರುಗಿ ನಮ್ಮ ಕಾಲಕ್ಕೇ ಹೋಗೋಣ.

ಪೆಡಂಭೂತದ ಬದಲು ಪಾಣಿಪತ್ ಯುದ್ಧ ನೋಡಬೇಕಾಯಿತು,'' ಪಾಪು ತಕರಾರು ಮಾಡಿದನು.

''ಅಶೋಕ ಚಕ್ರವರ್ತಿಯನ್ನ ನೋಡೋಲ್ವೇನೋ ಪಾಪು? ಕಿತ್ತೂರು ಚೆನ್ನಮ್ಮ?'' ಎಂದು ಬೇಬಿ ಆಶೆಯಿಂದ ಕೇಳಿದಳು.

''ಹೂಂ! ಆ ಬ್ರೋಂಟೋಸಾರಸ್, ಟಿರನ್ನೋಸಾರಸ್ ನಿಂಗೂ ಬೆನ್ನತ್ತಿದ್ದರೆ ತಿಳೀತಿತ್ತು!'' ಪಾಪು ನೆನಪು ಮಾಡಿಕೊಂಡು ಹೆದರಿಸಿದ.

''ಇಬ್ಬರ ಮಾತೂ ಬೇಡ'' ವಲ್ಲರಿ ಆಂಟಿ ಹೇಳಿದರು. ''ನಾವು ಮುಂಗಾನ ಕುಟುಂಬಕ್ಕೆ ಭೇಟಿ ಕೊಡೋಣ.''

''ಮುಂಗಾ ?'' ಬೇಬಿ ಉದ್ಗರಿಸಿದಳು.

''ಮಂಗ್ಯಾ'' ಪಾಪು ಕಣ್ಣರಳಿಸಿದ.

ಅಂಕಲ್ ಭೂರಾ ಹೇಳಿದರು : ''ಮಕ್ಕಳೇ ನಿಮ್ಮಲ್ಲಿಗೆ ಬರುವ ಮೊದಲು ನಾವೊಮ್ಮೆ ಹೀಗೇ ಪ್ರಯೋಗ ಮಾಡುತ್ತ ಕಾಲನೌಕೆಯಲ್ಲಿ ಹೋಗಿದ್ದೆವು. ಯಾವ ಕಾಲಕ್ಕೆಂದಿರಿ? ಆದಿಮಾನವನ ಯುಗಕ್ಕೆ. .. ..''

''ಅಂಕಲ್ - ಆಂಟೀ, ನಮಗೆ ಮೊದಲೇ ಏಕೆ ಹೇಳಲಿಲ್ಲ?'' ಬೇಬಿ ತಕರಾರು ಮಾಡಿದಳು.

''ನಿಮಗೆ ಕಾಣಿಕೆ ಕೊಡಬೇಕೆಂದು!'' ಆಂಟಿ ಹೇಳಿದರು. ''ಸರ್‌ಪ್ರೈಜ್ ಮಾಡಬೇಕೆಂದು!''

ಮಕ್ಕಳಿಗೆ ಬಹಳ ಕುತೂಹಲ ಹುಟ್ಟಿತು. ''ಅಂಕಲ್ ಮಂಗ್ಯಾನ ಕಡೆಗೆ ಕರೆದುಕೊಂಡು ಹೋಗಿರಿ.'' ಪಾಪು ಒಪ್ಪಿಕೊಳ್ಳುತ್ತಾ ಹೇಳಿದ.

''ಮಂಗ್ಯಾ ಅಲ್ಲವೋ ಪಾಪೂ. ನೀ ಮುಂಗ್ಯಾ! ಅಂಕಲ್ ಕರೆದುಕೊಂಡು ಹೋಗುವದು ಮುಂಗಾನ ಕಡೆಗೆ. ಅಲ್ಲವೇ ಅಂಕಲ್?''

''ಹೌದು ಬೇಬಿ'' ಅಂಕಲ್ ಮುಂದುವರೆಸಿದರು. ''ನಾನು ಹೇಳುವದನ್ನು ಕೇಳಿರಿ. ನಾವು ಹೋಗಿದ್ದು ಅರ್ಧ ಲಕ್ಷ ವರ್ಷಗಳಷ್ಟು ಹಿಂದೆ. ನಮಗೆ ಮುಂಗಾ ಎಂಬ ಗವಿ ಮಾನವನ ಭೆಟ್ಟಿ ಆಗಿತ್ತು. ಮತ್ತೆ ಬರುತ್ತೇವೆಂದು ಹೇಳಿ ಮರಳಿದ್ದೆವು.''

ಕಾಲನೌಕೆಯಲ್ಲಿದ್ದ ಒಂದು ಕಪಾಟಿನಿಂದ ಕಲ್ಲಿನ ಕೊಡಲಿಯನ್ನು ತೆಗೆದು ಮಕ್ಕಳಿಗೆ ತೋರಿಸಿದರು.

''ಇದು ಮುಂಗಾನ ಆಯುಧ'' ವಲ್ಲರಿ ಆಂಟಿ ತಿಳಿಸಿದರು. ''ಅವನಿಗೆ ನಮ್ಮ ಕಾಲದ ಕೆಲವು ವಸ್ತುಗಳನ್ನು ಕಾಣಿಕೆ ಕೊಡಬೇಕಾಗಿದೆ ಮತ್ತು ಅವನೂ ಕೆಲವು ಸಾಮಾನುಗಳನ್ನು ಕೊಡುತ್ತಾನೆ. ನಿಮಗೂ ಕಾಣಿಕೆ ಬೇಡವೇ?''

ಈಗ ಕಾಲನೌಕೆಯಲ್ಲಿ ನೀಲಿ ಬೆಳಕು ಬಿದ್ದಿತ್ತು. ಅಂದರೆ ಅದು ಪೆಡಂಭೂತಗಳ ಕಾಲದಿಂದ ಭವಿಷ್ಯಕ್ಕೆ ಬರತೊಡಗಿತ್ತು.

ಎಂಟು ಕೋಟಿ ವರ್ಷಗಳು ಹೋಗಿ ಏಳು ಕೋಟಿಗಳಾದವು. ಏಳು. .. .ಆರು....ಐದು. .. .ನಾಲ್ಕು. .. .ಮೂರು. .. .ಎರಡು. .. ಒಂದು ಕೋಟಿ!

ದೀಪ ಹಳದಿಯಾದವು!

''ಅಂಕಲ್, ನಿಮ್ಮ ಮುಂಗಾ ಒಂದು ಕೋಟಿ ವರ್ಷದ ಹಿಂದಿನವನೇ?'' ಬೇಬಿ ಕೇಳಿದಳು.

''ಇಲ್ಲ ಬೇಬಿ, ಅಂಕಲ್ ವಿವರಿಸಿದರು. ''ಗೇರು ಬದಲಿಸುತ್ತಿದ್ದೇನೆ. ಈಗ ಲಕ್ಷಗಳ ಲೆಕ್ಕಕ್ಕೆ ಹೋಗಬೇಕಾಗಿದೆ.''

ಕಾಲ ನೌಕೆ 50,000 ವರ್ಷಕ್ಕೆ ಬಂದಾಗ ಬ್ರೇಕು ಹಾಕಿ ನಿಲ್ಲಿಸಿದರು. ಕಾಲದಲ್ಲಿ ಸ್ವಲ್ಪ ಮುಂದೆ- ಹಿಂದೆ ಓಡಾಡಿಸಿ, ಕಡೆಗೆ ಮುಂಗಾನನ್ನು ಭೆಟ್ಟಿಯಾಗಿದ್ದ ಒಂದು ತಿಂಗಳ ನಂತರದ ದಿನಕ್ಕೆ ಒಯ್ದು ನಿಲ್ಲಿಸಿದರು.

## 6. ಮುಂಗಾನ ಕಾಣಿಕೆ

ಆದಿ ಮಾನವನ ನಾಡಿನಲ್ಲಿ ಆದೇ ಆಗ ಬೆಳಗಾಗಿತ್ತು. ಈ ಸಲ ಮೀಟಿಂಗು ಬೇಕಾಗಿರಲಿಲ್ಲ. ಪಿಸ್ತೂಲೂ ಬೇಕಾಗಿರಲಿಲ್ಲ. ಈಗ ಪೆಡಂಭೂತಗಳ ಬದಲು ಗೊತ್ತಿದ್ದ ಗೆಳೆಯರ ಗವಿಗೆ ಹೋಗಬೇಕಾಗಿದೆ.

ಹಾಗಿದ್ದರೂ ಅಂಕಲ್ ಭೂರಾ ಮಕ್ಕಳಿಗೆ ಅವಶ್ಯವಿದ್ದ ಮಾಹಿತಿ ಮತ್ತು ಸೂಚನೆಗಳನ್ನು ಕೊಟ್ಟಿದ್ದರು.

ಇವರು ಇಳಿದಲ್ಲಿ ಅಡವಿ ಇರಲಿಲ್ಲ. ಬಯಲುಸೀಮೆ. ಹತ್ತಿರವೇ ಗುಡ್ಡಗಳ ಸಾಲು. ಅವುಗಳಲ್ಲಿ ಗವಿಗಳು. ಗವಿಗಳಲ್ಲಿ ಆದಿಮಾನವರು. ಅವರಲ್ಲಿ ಮುಂಗಾ ಮತ್ತು ಅವನ ತಂಡ.

ಈ ಎಲ್ಲರೂ ಒಟ್ಟಿಗೇ ಗವಿಗಳತ್ತ ಹೊರಟರು. ಅದು ಒಂದು ಸಣ್ಣ ಹಳ್ಳಿಯಂತೆ ಕಾಣುತ್ತಿತ್ತು. ಗವಿಗಳ ಹೊರಗೆ ರಾತ್ರಿ ಹಚ್ಚಿದ್ದ ಬೆಂಕಿ ಉರಿಯುತ್ತಿತ್ತು.

ಕಾಲನೌಕೆಯವರನ್ನು ದೂರದಿಂದಲೇ ನೋಡಿದ ಒಬ್ಬನು ಮುಂದೆ ಬಂದ. ಅವನ ಕೈಯಲ್ಲಿ ಚೂಪಾದ ಕಲ್ಲಿತ್ತು. ಹೆದರಬೇಡಿರೆಂಬಂತೆ ಅಂಕಲ್ ಮಕ್ಕಳಿಗೆ ಸನ್ನೆ ಮಾಡಿದರು.

''ಕೇಂ? ಗ್ರೀಂ?. .. '' ಎಂದು ಅರ್ಥವಾಗದಂತೆ ಆ ಮಾನವ ಕೇಳಿದ. ಗೊರ ಗೊರ ಸದ್ದಿನಿಂದ ಅದು ಒಂದು ರೀತಿ ಕೆಮ್ಮಿದಂತೆ ಭಾಸವಾಗುತ್ತಿತ್ತು.

''ಮುಂಗಾ!. .. .. . ಮುಂಗಾ!. .. .. ಮುಂಗಾ!'' ಎಂದರು ಅಂಕಲ್.

ಅವನಿಗೆ ಅರ್ಥವಾಯಿತೆಂದು ಕಾಣುತ್ತಿದೆ. ಹೊರಳಿ ಓಡುತ್ತ ಒಂದು ಗವಿಯ ಕಡೆಗೆ ಹೋದ. ಅದೇ ಮುಂಗಾನ ಪರಿವಾರದ ಗವಿ ಎಂದು ಆಂಟಿ ಹೇಳಿದರು.

ಈ ಆದಿಮಾನವರನ್ನು ನೋಡಿ ಮಕ್ಕಳಿಗೆ ಕನಿಕರ ಬಂದಿತು. ಪಾಪ! ತೊಟ್ಟುಕೊಳ್ಳಲಿಕ್ಕೆ ಬಟ್ಟೆ ಇಲ್ಲ! ತೊಗಲಿನ ಲಂಗೋಟಿ ಹಾಕಿಕೊಂಡಿದ್ದಾರೆ. ಇಶ್ಶೀ! ಹೆಣ್ಣುಮಕ್ಕಳೂ ಕೂಡ ಬರೀ ಲಂಗೋಟಿ ಧರಿಸಿದ್ದಾರೆ. ಹುಡುಗ ಹುಡುಗಿಯರು ಅದನ್ನೂ ತೊಟ್ಟಿಲ್ಲ, ಗಡ್ಡ ಮೀಸೆ ಹಾಗೇ ಬಿಟ್ಟಿದ್ದಾರೆ. ಬಹಳ ಕೊಳಕು ಜನ!

''ಅಂಕಲ್, ಇವರೇಕೆ ಇಷ್ಟು ಹೊಲಸು?'' ಬೇಬಿ ಕೇಳಿದಳು.

''ಬೇಬಿ. ನಮ್ಮ ಹಿಪ್ಪಿಗಳಿಗಿಂತ ಎಷ್ಟೋ ಮೇಲು.'' ಆಂಟಿ ಉತ್ತರಿಸಿದರು. ''ಇವರು ಪ್ರಾಣಿಗಳಿಗಿಂತ ಮೇಲೆಂದು ತಿಳಿ. ನಾಗರಿಕತೆ ಇನ್ನೂ ಬೆಳೆದಿಲ್ಲ. ಪಾಪ! ಇವರಿಗೆ ಯಾರು ಕಲಿಸಬೇಕು? ಆದರೂ ಇವರು ಕಡಿಮೆ ಎಂದು ತಿಳಿಯಬೇಡ.''

''ಏಕೆ ಆಂಟೀ?'' ಪಾಪು ಕುತೂಹಲದಿಂದ ಕೇಳಿದ.

''ಕಾಡು ಪ್ರಾಣಿಗಳ ವಿರುದ್ಧ ಹೋರಾಡಿ ಹೇಗೋ ಬದುಕಬೇಕಾಗಿದೆ ಇವರು. ನೀವಾದರೆ ಇಲ್ಲಿ ನಾಲ್ಕು ದಿನವಾದರೂ ಇರಲು ಸಾಧ್ಯವೇ? ಇವರು ಪರಿಸರವನ್ನು ಗೆದ್ದುಬಂದಿದ್ದರಿಂದಲೇ ನೀನು ನಾನು ಹುಟ್ಟಿಬರಲು ಸಾಧ್ಯವಾಯಿತು,'' ಆಂಟಿ ತಿಳಿಸಿದರು.

ಇವರು ಹೀಗೆ ಮಾತನಾಡುತ್ತಿದ್ದಂತೆ ಅಂಕಲ್ ಭೂರಾ ಮುಂದೆ ಹೋಗಿದ್ದರು. ಮೋತಿ ಅವರನ್ನು ಹಿಂಬಾಲಿಸುತ್ತಿತ್ತು. ಎದುರಿಗೆ ಒಬ್ಬ ಓಡುತ್ತ ಬರತೊಡಗಿದ್ದ. ಅವನು ಮಾತ್ರ ಲಂಗೋಟಿಯಷ್ಟೇ ಅಲ್ಲದೆ ಮೇಲೆ ತೊಗಲಿನ ಬಟ್ಟೆಯನ್ನು ಹೊದ್ದುಕೊಂಡಿದ್ದ. ಅವನ ಹಿಂದೆ ನಾಲ್ಕಾರು ಹೆಂಗಸರೂ, ಮಕ್ಕಳೂ ಓಡಿಬಂದರು. ಅವರು ಕೂಡ ಮೈಮೇಲೆ ತೊಗಲಿನ ಉಡುಪು ಹಾಕಿಕೊಂಡಿದ್ದರು.

''ಮುಂಗಾ! ಮುಂಗಾ!!'' ಎಂದು ಬಂದಾತ ಎದೆ ಬಡಿದುಕೊಂಡ.

''ಭೂರಾ! ಭೂರಾ!!'' ಎಂದು ಅಂಕಲ್ ಕೂಡ ಅದೇ ರೀತಿ ಎದೆ ತಟ್ಟಿಕೊಂಡರು. ಬನ್ನಿರೆಂದು ಮಕ್ಕಳಿಗೆ ಸನ್ನೆ ಮಾಡಿದರು.

''ಆಂಟೀ, ನಿಮ್ಮ ಮುಂಗಾ ನಮ್ಮಂತೆ ಸುಧಾರಿಸಿದ್ದಾನಲ್ಲ? ಬಟ್ಟೆಯನ್ನೂ ಹಾಕಿಕೊಂಡಿದ್ದಾನೆ,'' ಎಂದು ಪಾಪು ಆಶ್ಚರ್ಯದಿಂದ ಕೇಳಿದ.

''ಹೌದು ಪಾಪೂ, ಮುಂಗಾ ಈ ತಂಡದ ನಾಯಕ ಅಥವಾ ಅರಸ. ಆದ್ದರಿಂದ ಅಂತಸ್ತಿಗೆ ತಕ್ಕಂತೆ ಅವನೂ ಅವನ ಕುಟುಂಬದವರೂ ಹೆಚ್ಚು ಬಟ್ಟೆ ಹಾಕಿಕೊಂಡಿದ್ದಾರೆ,'' ಎಂದು ಆಂಟಿ ತಿಳಿಸಿದರು.

''ಕುಟುಂಬದವರು? ಬಹಳ ಜನರಿದ್ದಂತೆ ಕಾಣುತ್ತಾರಲ್ಲ?'' ಬೇಬಿ ಕೇಳಿದಳು.

''ಅವರೆಲ್ಲ ಅವನ ಹೆಂಡಿರು ಮತ್ತು ಮಕ್ಕಳು,'' ಎಂದು ಆಂಟಿ ಹೇಳಿದಾಗ ಮಕ್ಕಳಿಗೆ ನಂಬಲಿಕ್ಕಾಗಲಿಲ್ಲ.

ಎಲ್ಲರೂ ಗವಿಯೊಳಗೆ ಹೋಗಿ ನೆಲದ ಮೇಲೆ ಕುಳಿತರು. ಒಳಗೆ

ಹಿಲಾಲಿನಂತೆ ದೀಪ ಉರಿಯುತ್ತಿತ್ತು. ಮೂಲೆಯಲ್ಲಿ ಕಲ್ಲುಗಳಿಂದ ಮಾಡಿದ ಭರ್ಜಿಗಳೂ, ಕೊಡಲಿಗಳೂ ಇದ್ದವು. ಹತ್ತಿರವೇ ಒಂದು ನುಣುಪಾದ ಕಲ್ಲಿತ್ತು. ಅದು ಸಾಣೆ ಕಲ್ಲೆಂದು ಆಂಟಿ ಹೇಳಿದರು.

''ಇವರಿಗೆ ದೀಪ ಹಚ್ಚುವುದು ಗೊತ್ತಿದೆಯಲ್ಲ?'' ಎಂದು ಬೇಬಿ ಕೇಳಿದಳು.

''ಹೌದು ಬೇಬಿ, ತಾವು ಬೇಟೆ ಮಾಡಿದ ಪ್ರಾಣಿಗಳ ನೆಣವನ್ನೇ ಎಣ್ಣೆಯಂತೆ ಉಪಯೋಗಿಸುತ್ತಾರೆ,'' ಆಂಟೀ ತಿಳಿಸಿದರು.

ಮುಂಗಾನ ಹೆಂಡಿರು ಮಕ್ಕಳೆಲ್ಲ ಕೂತೂಹಲದಿಂದ ಮಕ್ಕಳನ್ನು ಸುತ್ತುವರಿದಿದ್ದರು.

''ಪಾಪು! ಪಾಪು!!'' ಎಂದು ಪಾಪು ಎದೆ ತಟ್ಟಿಕೊಂಡ. ಅಂಕಲ್ ಮಾಡಿದಂತೆ.

''ತಂಡಾ! ತಂಡಾ!!'', ''ಭಂಗಾ! ಭಂಗಾ!!'' ಎಂದು ಮುಂತಾಗಿ ಸುತ್ತಲಿನವರು ತಮ್ಮ ತಮ್ಮ ಎದೆ ತಟ್ಟಿಕೊಂಡು ಹೇಳುತ್ತಾ ಹೋದರು.

ಅಂಕಲ್ ಭೂರಾ ಮುಂಗಾನಿಗೆ ಒಂದು ಪಿಸ್ತೂಲನ್ನೂ, ಒಂದು ದುರ್ಬೀನನ್ನೂ ಕಾಣಿಕೆ ಕೊಟ್ಟರು. ತಮ್ಮೊಡನೆ ತಂದಿದ್ದ ಪೇಯಗಳ ನಾಲ್ಕಾರು ಬಾಟ್ಲಿಗಳನ್ನೂ ಕೊಟ್ಟರು.

ಮುಂಗಾ ಕೆಲವು ಚರ್ಮದ ಸುರುಳಿಗಳನ್ನು ಬಿಚ್ಚಿದ. ಅದರಲ್ಲಿ ಹೋರಿಯಂಥ ಕೊಂಬಿನ ಪ್ರಾಣಿಗಳ ಚಿತ್ರ ಬರೆದಿತ್ತು. ಜಿಂಕೆ, ಕಾಡೆಮ್ಮೆ, ಕುದುರೆ, ಆನೆ, ಮುಂತಾಗಿ ಕೆಲವನ್ನು ಗುರುತಿಸಬಹುದಾಗಿತ್ತು. ಒಂದು ಚಿತ್ರದಲ್ಲಿ ಬೇಟೆಯಾಡುವುದನ್ನು ತೋರಿಸಿದ್ದರು.

ಮುಂಗಾ ಅವನ್ನು ಅಂಕಲ್ ಭೂರಾಗೆ ಕಾಣಿಕೆ ಕೊಟ್ಟ. ಒಬ್ಬ

ಮಗಳನ್ನು ಕೊಡಲು ಬಂದ. ಅಂಕಲ್ ಏನೋ ಸನ್ನೆ ಮಾಡಿ ನಕ್ಕರು. ''ಡಾರ್ಲಿಂಗ್ ಮುಂಗಾ ತನ್ನ ಮಗಳನ್ನು ನನಗೆ ಕಾಣಿಕೆ ಕೊಡುತ್ತಿದ್ದಾನೆ. ಮದುವೆಯಾಗಿರೆಂದು. ನಿನಗೆ ಸವತಿ ಹೇಗಿದ್ದಾಳೆ?'' ಎಂದು ಚೇಷ್ಟೆ ಮಾಡಿದರು.

''ನೀವು ಮುಂಗಾನಂತರ ಇನ್ನೂ ಹತ್ತು ಕಾಡು ಹುಡುಗಿಯರನ್ನು ಮದುವೆಯಾಗಿ ಇಲ್ಲಿಯೇ ಉಳಿಯಿರಿ. ನಾನು ಮಕ್ಕಳೊಂದಿಗೆ ಕಾಲನೌಕೆಯಲ್ಲಿ ನಮ್ಮ ಕಾಲಕ್ಕೆ ಮರಳುತ್ತೇನೆ!'' ಎಂದು ಆಂಟಿ ಹುಸಿಮುನಿಸಿನಿಂದ ನುಡಿದರು.

ಮುಂಗಾ ಮಕ್ಕಳಿಗೆ ಕೂಡ ಎಲುಬಿನ ಸರ, ಚರ್ಮದ ಚಿತ್ರ ಮುಂತಾಗಿ ಕೆಲವು ಕಾಣಿಕೆ ಕೊಟ್ಟ. ಮೋತಿಗೆ ಕೂಡ ಆಡಲು ಎಲುಬು ಕೊಟ್ಟ. ತಾವೇನು ಕೊಡಬೇಕೆಂದು ಮಕ್ಕಳಿಗೆ ಹೊಳೆಯಲಿಲ್ಲ, ಕಡೆಗೆ ಕಿಸೆಯಲ್ಲಿದ್ದ ಕೈ ವಸ್ತ್ರಗಳನ್ನೇ ಕೊಟ್ಟರು. ಮುಂಗಾ ಮತ್ತು ಮಕ್ಕಳು ಖುಷಿಯಾದರು.

## 7. ಮರಳಿ ನಮ್ಮ ಕಾಲಕ್ಕೆ

ಆದಿಮಾನವ ಮುಂಗಾನ ತಂಡದಲ್ಲಿ ಒಂದು ದಿನ ಕಳೆದು ಕಾಲನೌಕೆಯವರು ಮಕ್ಕಳೊಂದಿಗೆ ಮರಳಿದರು.

ಆಗ ಗಡಿಯಾರ ಮಧ್ಯಾಹ್ನ 1.30 ತೋರಿಸುತ್ತಿತ್ತು! ಪಾಪು-ಬೇಬಿಗೆ ಆಶ್ಚರ್ಯವಾಯಿತು. ಕಾಲನೌಕೆ ಬರುವ ಮೊದಲು ಎಲ್ಲವೂ ಹೇಗಿತ್ತೋ ಹಾಗೆಯೇ ಇತ್ತು.

‘‘ಅಂಕಲ್, ಆಂಟೀ, ಮನೆಗೆ ಬನ್ನಿರಿ,’’ ಎಂದು ಮಕ್ಕಳಿಬ್ಬರೂ ಕರೆದರು.

‘‘ಮತ್ತೊಮ್ಮೆ ಬರುತ್ತೇವೆ.’’ ಎಂದು ಟಾಟಾ ಹೇಳಿ ಕಾಲನೌಕೆಯವರು ಮುಂದಿನ ಶತಮಾನಕ್ಕೆ ಹೋದರು.

ಮೋತಿ ಎಲ್ಲಿ?

‘‘ಪಾಪೂ ಮೋತಿ ಕಾಣುವುದೇ ಇಲ್ಲವಲ್ಲ?’’ ಎಂದು ಬೇಬಿ ಗಾಬರಿಯಿಂದ ಕೇಳಿದಳು.

ಕಾಲನೌಕೆ ಮತ್ತೆ ಪ್ರತ್ಯಕ್ಷವಾಯಿತು! ಅದರೊಳಗಿಂದ ಮೋತಿ ಜಿಗಿಯಿತು.

‘‘ಮಕ್ಕಳೇ ನಿಮ್ಮ ಮೋತಿ ಉಳಿದಿತ್ತಷ್ಟೇ? ನಮ್ಮ ಶತಮಾನದಲ್ಲಿ ನಾಲ್ಕಾರು ದಿನ ಇಟ್ಟುಕೊಂಡಿದ್ದೆವು. ನೀವು ಗಾಬರಿಯಾಗಬಾರದೆಂದು ತಂದು ಬಿಟ್ಟಿದ್ದೇವೆ’’ ಎಂದು ಆಂಟಿ ಹೇಳಿದರು. ಇಬ್ಬರೂ ಟಾಟಾ ಹೇಳಿ ಕಾಲನೌಕೆಯಲ್ಲಿ ಮಾಯವಾದರು.



ಪಾಪು ಮತ್ತು ಬೇಬಿ ಅವಳಿ ಮಕ್ಕಳು. ಒಂದೇ ತರಗತಿಯಲ್ಲಿ ಅಭ್ಯಾಸ ಮಾಡುತ್ತಿರುವ ಪುಟಾಣಿಗಳು. ತಂದೆ ತಾಯಿಗಳ ಪ್ರೀತಿಯ ಮಕ್ಕಳು. ಬೇಬಿ ಪುಸ್ತಕ ಪ್ರಿಯೆ. ಪಾಪುಗೆ ಆಟಗಳಲ್ಲಿ ಆಸಕ್ತಿ. ನಾಯಿಮರಿ ಮೋತಿ ಈ ಪುಟಾಣಿಗಳ ನೆಚ್ಚಿನ ಗೆಳೆಯ.

ತಂದೆ ತಾಯಿಗಳಿಗೆ ತಿಳಿಯದಂತೆ ಇವರು ಮಾಡುವ ತುಂಟಾಟ, ಸಾಹಸಗಳಲ್ಲಿ ಅಥವಾ ಮಂಗಾಟಗಳಲ್ಲಿ ಮೂವರಿಗೂ ಸಮಪಾಲು.

ಮಕ್ಕಳೇ ಈ ಪುಟಾಣಿಗಳ ಸಾಹಸಗಳು ನಿಮಗೂ ಇಷ್ಟವಲ್ಲವೆ?

'ಕಾಲನೌಕೆ' ಈ ಪುಟಾಣಿಗಳ ಒಂದು ಸಾಹಸ ಕಥೆ. ನೀವು ಸೈಕಲ್ಲಿನಲ್ಲಿ, ಕಾರಿನಲ್ಲಿ, ಮೋಟಾರಿನಲ್ಲಿ, ಎತ್ತಿನಗಾಡಿಯಲ್ಲಿ ಅಥವಾ ವಿಮಾನದಲ್ಲಿ ಸಹ ಪ್ರಯಾಣ ಮಾಡಿರಬಹುದು. ಯಾವ ಪ್ರಯಾಣವೂ ಸಂತೋಷ ನೀಡುವಂಥದ್ದೇ.

ಆದರೆ ಕಾಲನೌಕೆಯಲ್ಲಿ ಅನೇಕ ಶತಮಾನಗಳಷ್ಟು ಹಿಂದಕ್ಕೆ, ಅಥವಾ ಕೆಲವು ಶತಮಾನ ಮುಂದಕ್ಕೆ ಪ್ರಯಾಣ ಮಾಡಿ, ಕಲ್ಪನೆಗೆ ನಿಲುಕದಂಥ ಅದ್ಭುತಗಳನ್ನು ಕಾಣುವುದು ಎಷ್ಟು ರೋಚಕವಾಗಿರುತ್ತದೆ!

ಈ ಪುಟಾಣಿ ಗೆಳೆಯರ ಅನುಭವದಲ್ಲಿ ನೀವೂ ಭಾಗಿಗಳಾಗಬಹುದು. ನಿಮಗಾಗಿ ಅವರ ಈ ಕಥೆ.

ರೂ. 6.

ISBN 81-7302-047-7